## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 97(1032+1073)

ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ ಮತ್ತು ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 21/09/2021

ಉತ್ತರಿಸುವವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ದಿಮೆಗಳ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಬೀದರ್ ನಗರಸಭೆ ವ್ಯಾಪ್ತಿಯಲ್ಲಿ ಕಳೆದ 5 ವರ್ಷಗಳಿಂದ ಸಾರ್ವಜನಿಕರಿಂದ ಸಂಗ್ರಹಿಸಿದ ಆಸ್ತಿ ತೆರಿಗೆ ಮೊತ್ತವೆಷ್ಟು; (ವಾರ್ಡ್‌ವಾರು ಮಾಹಿತಿ ನೀಡುವುದು) ಸದರಿ ವಸೂಲಾದ ತೆರಿಗೆ ಹಣವನ್ನು ಯಾವ ಬ್ಯಾಂಕಿನಲ್ಲಿ ಜಮಾ ಮಾಡಲಾಗುವುದು; ಸದರಿ ಹಣದ ಬಗ್ಗೆ ಪರೀಶಿಲಿಸಿ ದೃಢೀಕರಿಸುವ ಅಧಿಕಾರಿ ಯಾರು; | ಬೀದರ್ ನಗರಸಭೆಯಲ್ಲಿ 2016-17ನೇ ಸಾಲಿನಿಂದ 2020-21ನೇ ಸಾಲಿನವರೆಗೆ ಸಂಗ್ರಹಿಸಲಾದ ಆಸ್ತಿ ತೆರಿಗೆ ಮೊತ್ತದ ವಿವರಗಳನ್ನು ಅನುಬಂಧ-1ರಲ್ಲಿ ನೀಡಿದೆ.<br>ಆಸ್ತಿ ತೆರಿಗೆಯ ವಸೂಲಾತಿಗಾಗಿ ಬೀದರ್ ನಗರದಲ್ಲಿನ ಐ.ಡಿ.ಬಿ.ಐ. ಬ್ಯಾಂಕ್‌ನಲ್ಲಿ ಪ್ರತ್ಯೇಕ ಬ್ಯಾಂಕ್ ಖಾತೆ ತೆರೆಯಲಾಗಿದ್ದು ಸದರಿ ಖಾತೆಯಲ್ಲಿ ಆಸ್ತಿ ತೆರಿಗೆ ಮೊತ್ತ ಜಮಾ ಆಗಿರುತ್ತದೆ.<br>ಬೀದರ್ ನಗರಸಭೆಯ ಕಂದಾಯ ಅಧಿಕಾರಿರವರು ವಸೂಲಾದ ಆಸ್ತಿ ತೆರಿಗೆ ವಿವರಗಳನ್ನು ಪರಿಶೀಲಿಸಿ ಧೃಡೀಕರಿಸುತ್ತಾರೆ. |
| ಆ. | ಸದರಿ ಸಾರ್ವಜನಿಕರಿಂದ ಸಂಗ್ರಹಿಸಿದ ಕೋಟ್ಯಾಂತರ ರೂಪಾಯಿ ಆಸ್ತಿ ತೆರಿಗೆಯನ್ನು ಸರ್ಕಾರಕ್ಕೆ ಜಮಾ ಮಾಡದೇ ಬೀದರ್ ನಗರಸಭೆ ಸಿಬ್ಬಂದಿಯವರು ವಂಚನೆ ಮಾಡಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಇ | ಬಂದಿದ್ದಲ್ಲಿ ಎಷ್ಟು ಜನರಿಂದ ಎಷ್ಟು ಕೋಟಿ ರೂಪಾಯಿ ವಂಚನೆಯಾಗಿದೆ; ಎಷ್ಟು ವರ್ಷದಿಂದ ಈ ವಂಚನೆ ಕಾರ್ಯ ನೆಡೆಯುತ್ತಿದೆ; | ಬೀದರ್ ನಗರಸಭೆಯಲ್ಲಿ ಒಟ್ಟು 3 ವಂಚನೆ ಪ್ರಕರಣಗಳು ಪ್ರಸಕ್ತ ಸಾಲಿನಲ್ಲಿ ವರದಿಯಾಗಿದ್ದು, ದುರುಪಯೋಗವಾದ ಆಸ್ತಿ ತೆರಿಗೆ ಒಟ್ಟು ಮೊತ್ತ ರೂ. 3,85,118/-ಗಳು ಆಗಿರುತ್ತದೆ. 2021-22 ನೇ ಸಾಲಿನಲ್ಲಿ ವಂಚನೆ ಪ್ರಕರಣ ನಡೆದಿರುತ್ತದೆ. |
| ಈ | ಕೋಟ್ಯಾಂತರರೂಪಾಯಿ ವಂಚನೆ ಮಾಡಿದ ಸಿಬ್ಬಂದ್ದಿಯವರು ಯಾರು; ಅವರ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ಪೌರಾಯುಕ್ತರು, ನಗರಸಭೆ ಬೀದರ್ ರವರು ದಿನಾಂಕ:06-08-2021 ಮತ್ತು ದಿನಾಂಕ:09-09-2021ರ ವರದಿ ಆಧರಿಸಿ ಬೀದರ್ ನಗರಸಭೆ ವ್ಯಾಪ್ತಿಯಲ್ಲಿ ಬರುವ ಆಸ್ತಿಗಳ ಮಾಲೀಕರಿಂದ ಆಸ್ತಿ ತೆರಿಗೆ ರೂ. 3,85,118/-ಗಳನ್ನು ವಸೂಲಿ ಮಾಡಿ ನಗರಸಭೆಯ ನಿಗಧಿತ ಬ್ಯಾಂಕ್ ಖಾತೆಗೆ ಜಮಾ ಮಾಡದೇ ನಗರಸಭೆಗೆ ಆರ್ಥಿಕ ನಷ್ಟವನ್ನುಂಟು ಮಾಡಿ |

| | | |
|---|---|---|
| | | ಕರ್ತವ್ಯ ಲೋಪವೆಸಗಿರುವ ಬೀದರ್ ನಗರಸಭೆಯ 4 ಜನ ಸಿಬ್ಬಂದಿಗಳಾದ 1. ಶ್ರೀ. ಮಹ್ಮದ್‌ನಾಸಿರ್ ಖಾನ್, ಪ್ರಭಾರಿಕರ ವಸೂಲಿಗಾರ 2. ಶ್ರೀ.ಲೋಕೇಶ ಕರವಸೂಲಿಗಾರ, 3. ಶ್ರೀ ಬಸವರಾಜ ಜೋರೆ ದ್ವಿತೀಯ ದರ್ಜೆ ಸಹಾಯಕ ಮತ್ತು 4. ಶ್ರೀ.ಮೇಹಬುಬ ಸಾಬ, ಕರವಸೂಲಿಗಾರ ಇವರ ವಿರುದ್ಧ ದಿನಾಂಕ:12.08.2021 ರಂದು ಜಿಲ್ಲಾಧಿಕಾರಿಗಳು, ಬೀದರ್ ರವರಿಂದ ಇಲಾಖಾ ವಿಚಾರಣೆ ಬಾಕಿ ಇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.<br>ಪೌರಾಯುಕ್ತರು, ನಗರಸಭೆ ಬೀದರ್ ರವರು ನಗರಸಭೆಗೆ ಆರ್ಥಿಕ ನಷ್ಟವನ್ನುಂಟು ಮಾಡಿದ ನಾಲ್ಕು ಜನ ಸಿಬ್ಬಂದಿಗಳ ವಿರುದ್ಧ ಬೀದರ್ ಮಾರ್ಕೆಟ್ ಪೋಲೀಸ್ ಠಾಣೆಯಲ್ಲಿ ಅಪರಾಧ ಸಂ. 54/2021 ಕಲಂ. 406, 409 ಜೊತೆ 34 ಐಪಿಸಿ ರಡಿ ದಿನಾಂಕ:12.08.2021ರಂದು ಪ್ರಕರಣ ದಾಖಲಿಸಿರುತ್ತಾರೆ. |
| ಈ. | ಇಂತಹ ವಂಚನೆ ಪ್ರಕರಣ ಬೀದರ್ ನಗರಸಭೆಯೊಂದರಲ್ಲಿ ನಡೆದಿದೆಯೋ, ಅಥವಾ ಬೇರೆ ಬೇರೆ ನಗರಸಭೆ/ಪುರಸಭೆಗಳಲ್ಲಿಯೂ ನಡೆದಿದೆಯೇ? (ವಿವರ ನೀಡುವುದು) | ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಂದ ಆಸ್ತಿ ತೆರಿಗೆ ವಂಚನೆ ಪ್ರಕರಣಗಳ ಕುರಿತು ವರದಿಯನ್ನು ಪಡೆಯಲಾಗಿದ್ದು, ಬೀದರ್ ನಗರಸಭೆ ಹೊರತುಪಡಿಸಿ ರಾಜ್ಯದ ಇತರೆ ಮೂರು ಸ್ಥಳೀಯ ಸಂಸ್ಥೆಗಳಲ್ಲಿ ಆಸ್ತಿ ತೆರಿಗೆ ವಂಚನೆ ಪ್ರಕರಣಗಳು ನಡೆದಿರುವುದು ಕಂಡುಬಂದಿರುತ್ತದೆ.<br>ಅನುಬಂಧ-2ರಲ್ಲಿ ವಿವರಗಳನ್ನು ಲಗತ್ತಿಸಿದೆ. |

ಸಂಖ್ಯೆ: ನಅಇ 197 ಜಿಇಎಲ್ 2021(ಇ)

ಎನ್. ನಾಗರಾಜು (ಎಂ.ಟಿ.ಬಿ)
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು